# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1223
ಸದಸ್ಯರ ಹೆಸರು : ಶ್ರೀ ಆರ್.ಧರ್ಮಸೇನ
(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 23.12.2021.
ಉತ್ತರಿಸುವ ಸಚಿವರು : ಗೃಹ ಸಚಿವರು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ನಗರದ ಪ್ರಮುಖ ರಸ್ತೆಗಳಲ್ಲಿ ಒಂದು ಕಡೆ ಪಾರ್ಕಿಂಗ್‌ಗೆ ಅವಕಾಶ ಇದ್ದು, ಇನ್ನೊಂದು ಕಡೆ ತಳ್ಳುಗಾಡಿಗಳವರು ನಿಂತು ವ್ಯಾಪಾರ ಮಾಡುತ್ತಿರುವುದರಿಂದ ಟ್ರಾಫಿಕ್ ಸಮಸ್ಯೆ ಉಂಟಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿಲ್ಲವೇ; ಬಂದಿದ್ದಲ್ಲಿ, ಇದನ್ನು ತಪ್ಪಿಸಲು ಸರ್ಕಾರ ಏನು ಕ್ರಮ ತೆಗೆದುಕೊಳ್ಳುವುದು ; | ಬಂದಿರುತ್ತದೆ.<br>ಸಂಚಾರ ಪೊಲೀಸರ ಕರ್ತವ್ಯಗಳಲ್ಲಿ ನಿಯಮ ಜಾರಿ ಪ್ರಮುಖ ಜವಾಬ್ದಾರಿಯಾಗಿರುತ್ತದೆ.ಈ ಜವಾಬ್ದಾರಿಯು ಹೆಚ್ಚಿನ ಉಲ್ಲಂಘನೆಗಳು ಮತ್ತು ಇದರಿಂದ ಸಂಚಾರ ಸಮಸ್ಯೆಗಳು ಸಂಭವಿಸುವುದನ್ನು ತಡೆಗಟ್ಟಲು ಸಂಚಾರ ನಿಯಮಾವಳಿ ಹಾಗೂ ಕಾಯ್ದೆಯನ್ನು ಜಾರಿಗೊಳಿಸುವುದಾಗಿರುತ್ತದೆ.<br>ನಗರದಲ್ಲಿನ ವಾಹನ ಸಂಖ್ಯೆಯು 95 ಲಕ್ಷಕ್ಕೂ ಮೀರಿದ್ದು, ಪ್ರತಿದಿನ ಸರಿಸುಮಾರು 2000ಕ್ಕೂ ಮೇಲ್ಪಟ್ಟು ಹೊಸ ವಾಹನಗಳು ನಗರದ ರಸ್ತೆಗಳಿಗೆ ಇಳಿಯುತ್ತಿರುವುದರಿಂದ ರಸ್ತೆ ಸಾಮರ್ಥ್ಯವನ್ನು ಮೀರಿರುವ ವಾಹನಗಳ ಸಂಖ್ಯೆಯೇ ನಗರದ ಸಂಚಾರ ದಟ್ಟಣೆ ಹಾಗೂ ಸಂಚಾರ ಒತ್ತಡಕ್ಕೆ ಪ್ರಮುಖ ಕಾರಣವಾಗಿದೆ. ರಸ್ತೆಗಳು ಹಾಗೂ ರಸ್ತೆಯ ಬದಿಯ ಪಾದಚಾರಿ ರಸ್ತೆಗಳ ಆಕ್ರಮಣದಿಂದಾಗಿ ಪಾದಚಾರಿಗಳು ಮುಖ್ಯ ರಸ್ತೆಗಳ ಮೇಲೆ ನಡೆದಾಡುವ ಅನಿವಾರ್ಯತೆಯನ್ನು ತಪ್ಪಿಸಲು ಹಾಗೂ ಪಾದಚಾರಿಗಳು ಅಪಘಾತಕ್ಕೀಡಾಗುವುದನ್ನು ತಪ್ಪಿಸಲು ಪಾದಚಾರಿ ಮಾರ್ಗಗಳನ್ನು ಈ ಕೆಳಕಂಡ ವಿಧಗಳಲ್ಲಿ ಆಕ್ರಮಣ ಮಾಡಿಕೊಂಡಿರುವವರ ವಿರುದ್ಧ ಸಂಚಾರ ಪೊಲಿಸ್ ವತಿಯಿಂದ ಈಗಾಗಲೇ ಕ್ರಮಗಳನ್ನು ಕೈಗೊಳ್ಳಲಾಗಿದೆ.<br>1. ವಾಣಿಜ್ಯ ಮಳಿಗೆಗಳು ತಮ್ಮ ಸರಕು ಮತ್ತು ಸಾಮಗ್ರಿಗಳನ್ನು ಮಳಿಗೆಗಳ ಮುಂದೆ ಹಾಗೂ ಪಾದಚಾರಿ ಮಾರ್ಗಗಳ ಮೇಲೆ ಹಾಕುವುದು.<br>2. ವಾಣಿಜ್ಯ ಮಳಿಗೆಗಳ ಮಾಲೀಕರು ತಮ್ಮ ಮಳಿಗೆಯ / ಸಾಮಗ್ರಿಗಳ ಬಗ್ಗೆ ಪ್ರಚಾರ ಪಡಿಸುವ ಸಾಮಗ್ರಿಗಳನ್ನು ಪಾದಚಾರಿ ಮಾರ್ಗಗಳ ಮೇಲೆ ಇಡುವುದು.<br>3. ತಿಂಡಿ-ತಿನಿಸುಗಳನ್ನು ಮಾರಾಟ ಮಾಡಲು ತಳ್ಳುವ ಗಾಡಿಗಳನ್ನು ಪಾದಚಾರಿ ಮಾರ್ಗದ ಮೇಲೆ ಅಡ್ಡಲಾಗಿ ನಿಲ್ಲಿಸುವುದು.<br>4. ಕೆಲವ್ಯಕ್ತಿಗಳು ಹಾಗೂ ಚಿಲ್ಲರೆ ವ್ಯಾಪಾರಿಗಳು ಯಾವುದೇ ಮಳಿಗೆಗಳಿಲ್ಲದೆ ಪಾದಚಾರಿ ಮಾರ್ಗಗಳ ಮೇಲೆ ಮಾರಾಟ ಮಾಡುವುದು.<br>5. ವಾಣಿಜ್ಯ ಮಳಿಗೆಗಳಿಗೆ ಭೇಟಿ ನೀಡುವ ಸಾರ್ವಜನಿಕರು ತಮ್ಮ ವಾಹನಗಳನ್ನು ಪಾದಚಾರಿ ಮಾರ್ಗದ ಮೇಲೆಯೇ ನಿಲ್ಲಿಸುವುದು, ಇತ್ಯಾದಿ.<br>ರಸ್ತೆ ಸುರಕ್ಷತೆಯ ಹಿತದೃಷ್ಟಿಯಿಂದ ಬೆಂಗಳೂರು ನಗರದಲ್ಲಿ ಮೇಲ್ಕಂಡಂತೆ ರಸ್ತೆ ಮತ್ತು ಪಾದಚಾರಿ ಮಾರ್ಗಗಳನ್ನು |

ಆಕ್ರಮಿಸಿಕೊಂಡಿರುವವರ ವಿರುದ್ಧ ಕರ್ನಾಟಕ ಪೊಲೀಸ್ ಕಾಯ್ದೆ – 1963ರ ಕಲಂ 92(ಜಿ) ಅನುಸಾರ ಹಾಗೂ ಖಾಯಂ ಆಗಿ ಪಾದಚಾರಿ ರಸ್ತೆಗಳನ್ನು ಆಕ್ರಮಿಸಿಕೊಂಡುವವರ ವಿರುದ್ಧ ಭಾರತೀಯ ದಂಡ ಸಂಹಿತೆ ಕಲಂ 283ರ ಪ್ರಕಾರ ಕಠಿಣ ಕ್ರಮಗಳನ್ನು ಕೈಗೊಂಡು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಅಧಿಕಾರಿಗಳ ಸಹಕಾರದೊಂದಿಗೆ ಆದಷ್ಟು ಪಾದಚಾರಿ ರಸ್ತೆ ಹಾಗೂ ರಸ್ತೆ ಅತಿಕ್ರಮಣಕಾರರನ್ನು ತೆರವುಗೊಳಿಸಲಾಗುತ್ತಿದೆ.

ಆ) ರಸ್ತೆಗಳಲ್ಲಿ ಎರಡು ಕಡೆಗಳಲ್ಲಿ ವಸ್ತುಗಳನ್ನಿಟ್ಟುಕೊಂಡು ವ್ಯಾಪಾರಗಳನ್ನು ಮಾಡುತ್ತಿರುವುದರಿಂದ ವಾಹನಗಳು ಮತ್ತು ಜನರ ಓಡಾಟಕ್ಕೆ ತೊಂದರೆಯಾಗುತ್ತಿದ್ದು, ಸಂಚಾರಿ ಪೊಲೀಸರು ಇವರನ್ನು ತೆರವುಗೊಳಿಸಲು ಕ್ರಮ ಕೈಗೊಳ್ಳುತ್ತಿಲ್ಲದಿರುವುದಕ್ಕೆ ಕಾರಣಗಳೇನು ; ಈಗಾಲಾದರೂ ಸರ್ಕಾರ ಈ ಬಗ್ಗೆ ಗಮನ ಹರಿಸುತ್ತದೆಯೇ ;

ಬೆಂಗಳೂರು ನಗರದ ರಸ್ತೆಗಳಲ್ಲಿ ನಿಂತು ಕೈಗಾಡಿಗಳವರು ಮತ್ತಿತರರು ವ್ಯಾಪಾರ ಮಾಡುತ್ತಾ ಜನ ಸಂಚಾರಕ್ಕೆ ಮತ್ತು ವಾಹನಗಳ ಸಂಚಾರಕ್ಕೆ ಅಡಚಣೆ ಮಾಡುತ್ತಿರುವವರ ವಿರುದ್ಧ ಈ ಕೆಳಕಂಡಂತೆ ಕಾನೂನು ರೀತಿ ಕ್ರಮ ಕೈಗೊಳ್ಳಲಾಗುತ್ತಿದೆ.

1. ಪಾದಚಾರಿ ಮಾರ್ಗದಲ್ಲಿ ವ್ಯಾಪಾರ ಮಾಡುವ ವ್ಯಾಪಾರಸ್ಥರ ವಿರುದ್ಧ ಹಾಗೂ ಪಾದಚಾರಿ ರಸ್ತೆ ಮೇಲೆ ವಾಹನಗಳನ್ನು ನಿಲ್ಲಿಸುವವರ ವಿರುದ್ಧ ಆಗಾಗ್ಗೆ ವಿಶೇಷ ಕಾರ್ಯಾಚರಣೆಯನ್ನು ಹಮ್ಮಿಕೊಂಡು ಪ್ರಕರಣಗಳನ್ನು ದಾಖಲು ಮಾಡಿ ತೆರವುಗೊಳಿಸಲಾಗುತ್ತಿದೆ.
2. ಪಾದಚಾರಿ ಮಾರ್ಗವನ್ನು ವ್ಯಾಪಾರಸ್ಥರಾಗಲಿ, ಅಂಗಡಿಗಳ ಅಥವಾ ಕಟ್ಟಡಗಳ ಮಾಲೀಕರಾಗಲಿ ಹಾಗೂ ಇತರರು ತಮ್ಮ ಸ್ವಂತ ಬಳಕೆಗೆ ಬಳಸಿ ಸಾಮಾನ್ಯ ಜನರಿಗೆ ತೊಂದರೆ ಮಾಡುವವರನ್ನು ಪತ್ತೆ ಮಾಡಿ ಅಂತಹವರುಗಳ ವಿರುದ್ಧ ಕರ್ನಾಟಕ ಪೊಲೀಸ್ ಕಾಯ್ದೆಯಡಿಯಲ್ಲಿ ಪ್ರಕರಣಗಳನ್ನು ದಾಖಲು ಮಾಡಿ ಕ್ರಮ ಜರುಗಿಸಲಾಗುತ್ತಿದೆ.
3. ರಸ್ತೆಗಳಲ್ಲಿ ಸುಗಮ ಸಂಚಾರಕ್ಕೆ ಅಡಚಣೆಯಾಗುವಂತೆ ಕೈಗಾಡಿಗಳನ್ನು ನಿಲ್ಲಿಸಿಕೊಂಡು ವ್ಯಾಪಾರ ಮಾಡುವವರ ವಿರುದ್ಧ ಹಾಗೂ ಪಾದಚಾರಿ ರಸ್ತೆಯನ್ನು ಶಾಶ್ವತವಾಗಿ ಅತಿಕ್ರಮಿಸಿಕೊಂಡು ವ್ಯಾಪಾರ ಮಾಡುತ್ತಿರುವ ದರ್ಶಿನಿ ಮತ್ತು ಇತರೆ ಹೋಟೆಲ್‌ಗಳ ವಿರುದ್ಧವೂ ಸಹ ಕರ್ನಾಟಕ ಪೊಲೀಸ್ ಕಾಯ್ದೆಯಡಿಯಲ್ಲಿ ಮತ್ತು ಭಾರತೀಯ ದಂಡ ಸಂಹಿತೆಯ ಕಲಂ 283ರ ಅಡಿಯಲ್ಲಿ ಪ್ರಕರಣಗಳನ್ನು ದಾಖಲಿಸಿ ಕ್ರಮ ಕೈಗೊಳ್ಳುವ ಮೂಲಕ ಪಾದಚಾರಿಗಳ ಮಾರ್ಗದಲ್ಲಿನ ಅಡಚಣೆಗಳನ್ನು ನಿವಾರಣೆ ಮಾಡಲಾಗುತ್ತಿದೆ.

ಈ ನಿಟ್ಟಿನಲ್ಲಿ ಕಳೆದ 3 ವರ್ಷಗಳಲ್ಲಿ ದಾಖಲಿಸಿರುವ ಪ್ರಕರಣಗಳು ಈ ಕೆಳಕಂಡಂತಿವೆ.

| ವರ್ಷ | ಕೆ.ಪಿ. ಆಕ್ಟ್ ಅಡಿಯಲ್ಲಿ ದಾಖಲಿಸಿದ ಪ್ರಕರಣಗಳು | ಐಪಿಸಿ ಕಲಂ 283 ರಡಿ ದಾಖಲಿಸಿದ ಪ್ರಕರಣಗಳು |
|---|---|---|
| 2019 | 997 | 258 |
| 2020 | 1397 | 115 |
| 2021 (ನವೆಂಬರ್ ಮಾಹೆಯ ಅಂತ್ಯದವರೆಗೆ) | 4729 | 57 |

ಇ) ರಸ್ತೆಗಳಲ್ಲಿ ಸುಗಮ ಸಂಚಾರಕ್ಕೆ ಅವಕಾಶ ಮಾಡಿಕೊಡಲು ಸಂಚಾರಿ ಪೊಲೀಸರು ಯಾವ ಕ್ರಮಗಳನ್ನು ಕೈಗೊಳ್ಳಲಿದ್ದಾರೆ ? (ವಿವರ ಒದಗಿಸುವುದು)

ರಸ್ತೆಗಳಲ್ಲಿ ಸುಗಮ ಸಂಚಾರಕ್ಕೆ ಅವಕಾಶ ಮಾಡಿಕೊಡಲು ಬೆಂಗಳೂರು ನಗರ ಸಂಚಾರ ಪೊಲೀಸರು ಹಲವಾರು ಕ್ರಮಗಳನ್ನು ಕೈಗೊಂಡಿದ್ದು, ಕೈಗೊಂಡಿರುವ ಕ್ರಮಗಳ ವಿವರಗಳು ಈ ಕೆಳಕಂಡಂತಿವೆ.

- ಬೆಂಗಳೂರು ನಗರದಲ್ಲಿ ಇರುವ ರಸ್ತೆಗಳ ಮಿತಿಗಿಂತ ಹೆಚ್ಚು ವಾಹನಗಳು ಸಂಚರಿಸುತ್ತಿದ್ದು ವಾಹನ ದಟ್ಟಣೆಗೆ ಪ್ರಮುಖ ಕಾರಣವಾಗಿದ್ದು, ಇದನ್ನು ಸುಗಮಗೊಳಿಸಲು ಕೆಲವು ಪ್ರಮುಖ ರಸ್ತೆಗಳಲ್ಲಿ ಸಿಗ್ನಲ್ ಫ್ರೀ ಕಾರಿಡಾರ್‌ಗಳನ್ನು ಮಾಡಿ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡಲಾಗಿದೆ.
- ಸಂಚಾರ ದಟ್ಟಣೆ/ ಸಮಸ್ಯೆಗಳು ಕಂಡುಬರುತ್ತಿರುವ ಸ್ಥಳಗಳಲ್ಲಿ ಪರಿವೀಕ್ಷಣೆ ನಡೆಸಿ ಸುಗಮ ಸಂಚಾರದ ಹಿತದೃಷ್ಟಿಯಿಂದ ನಗರದ ಹಲವಾರು ಸ್ಥಳಗಳಲ್ಲಿ ಬಲ ತಿರುವು ಹಾಗೂ ಯು-ತಿರುವುಗಳನ್ನು ನಿರ್ಬಂಧಿಸಲಾಗಿದೆ.
- ಬೆಂಗಳೂರು ನಗರದ ಕೇಂದ್ರ ಭಾಗದಲ್ಲಿನ ಹೆಚ್ಚು ಸಂಚಾರ ದಟ್ಟಣೆ ಇರುವ ಪ್ರದೇಶಗಳನ್ನು ಗುರುತಿಸಿ ರಸ್ತೆ ಅಗಲವಿದ್ದು ಮುಕ್ತ ಎಡ ತಿರುವು ಅಥವಾ ಬಲ ತಿರುವು ಇರುವ ಕಡೆಗಳಲ್ಲಿ ಸಂಚಾರ ಪರಿಕರಗಳನ್ನು (Street Furniture) ಅಳವಡಿಸಿ ಪಥಶಿಸ್ತನ್ನು ಜಾರಿ ಮಾಡಿದ ಕಾರಣ ನಿರೀಕ್ಷೆಗೂ ಮೀರಿ ಅಪಘಾತಗಳ ಸಂಖ್ಯೆಯು ಇಳಿಮುಖವಾಗುವುದಕ್ಕೆ ಕಾರಣವಾಗಿರುತ್ತದೆ. ಹಾಗೂ ಸಂಚಾರವೂ ಸಹ ಸುಗಮಗೊಂಡಿರುತ್ತದೆ.
- ಪಿಡಿಎ (ಪರ್ಸನಲ್ ಡಿಜಿಟಲ್ ಅಸಿಸ್ಟೆಂಟ್) ಉಪಕರಣಗಳನ್ನು ಎ.ಎಸ್.ಐ, ಪಿ.ಎಸ್.ಐ ಮತ್ತು ಪಿ.ಐ ಹಂತದವರೆಗಿನ ಅಧಿಕಾರಿಗಳಿಗೆ ಹಂಚಿಕೆ ಮಾಡಲಾಗಿದ್ದು, ಇದರ ಮೂಲಕ ಸಂಚಾರ ನಿಯಮಗಳನ್ನು ಉಲ್ಲಂಘಿಸುವ ಚಾಲಕರುಗಳ ವಿರುದ್ಧ ಸ್ಥಳದಲ್ಲೇ ಸಂಚಾರ ಪೊಲೀಸ್ ಅಧಿಕಾರಿಗಳು ಪ್ರಕರಣಗಳನ್ನು ದಾಖಲಿಸಿ ಸ್ಥಳದಂಡವನ್ನು ಪಾವತಿಸಿಕೊಳ್ಳುವ ವ್ಯವಸ್ಥೆ ಕಲ್ಪಿಸಲಾಗಿದೆ.
- ರಸ್ತೆಯಲ್ಲಿ ವಾಹನಗಳ ಸುಗಮ ಸಂಚಾರ ಹಿತದೃಷ್ಟಿಯಿಂದ ಸಂಚಾರ ನಿಯಮ ಜಾರಿಯು ಅತ್ಯಂತ ಪ್ರಮುಖವಾಗಿದ್ದು, ಬೆಂಗಳೂರು ನಗರದಲ್ಲಿ ಸಂಚಾರ ನಿಯಮ ಉಲ್ಲಂಘಿಸುತ್ತಿರುವವರ ವಿರುದ್ಧ ಸಂಪರ್ಕ ಸಹಿತ ಹಾಗೂ ಸಂಪರ್ಕರಹಿತ ಎಂಬ ಎರಡು ಪ್ರಕಾರಗಳಡಿಯಲ್ಲಿ ನಿಯಮ ಜಾರಿ ಪ್ರಕರಣಗಳನ್ನು ದಾಖಲು ಮಾಡಲಾಗುತ್ತಿರುತ್ತದೆ.

ಕಳೆದ 3 ವರ್ಷಗಳಲ್ಲಿ ಸಂಪರ್ಕ ಸಹಿತ ಹಾಗೂ ಸಂಪರ್ಕ ರಹಿತ ನಿಯಮ ಜಾರಿಯಡಿಯಲ್ಲಿ ದಾಖಲು ಮಾಡಿರುವ ಪ್ರಕರಣಗಳ ವಿವರಗಳು ಈ ಕೆಳಕಂಡಂತಿರುತ್ತದೆ.

| ಕ್ರ ಸಂ | ವರ್ಷ | ನಿಯಮ ಜಾರಿ ವಿಧ | |
|---|---|---|---|
| | | ಸಂಪರ್ಕ ಸಹಿತ | ಸಂಪರ್ಕ ರಹಿತ |
| 1 | 2019 | 39,79,303 | 39,45,831 |
| 2 | 2020 | 20,98,952 | 62,84,785 |
| 3 | 2021 (ನವೆಂಬರ್ ವರೆಗೆ) | 14,30,024 | 71,37,532 |
| | ಒಟ್ಟು | 75,08,279 | 1,73,68,148 |

- ❖ ಬೆಂಗಳೂರು ನಗರದ 107 ಪ್ರಮುಖ ರಸ್ತೆಗಳನ್ನು ಗುರುತಿಸಿ ಝೀರೋ ಟಾಲರೆನ್ಸ್ ರಸ್ತೆ ಎಂಬುದಾಗಿ ಜಾರಿ ಮಾಡಲಾಗಿರುತ್ತದೆ. ಅಂತಹ ರಸ್ತೆಗಳಲ್ಲಿ ಯಾವುದೇ ರೀತಿಯ ಅನಧಿಕೃತ ವಾಹನ ನಿಲುಗಡೆ, ತಪ್ಪು ವಾಹನ ನಿಲುಗಡೆ ಹಾಗೂ ಫುಟ್‌ಪಾತ್ ಮೇಲೆ ವಾಹನ ನಿಲುಗಡೆಗಳಾಗದಂತೆ ಸಂಚಾರ ಅಧಿಕಾರಿಗಳ ಗಸ್ತುಗಳನ್ನು ಏರ್ಪಡಿಸಲಾಗಿರುತ್ತದೆ.
- ❖ ಬೆಂಗಳೂರು ನಗರದ ರಸ್ತೆಗಳಲ್ಲಿ ಭಾರೀ ಸರಕು ಸಾಗಣೆ ವಾಹನಗಳಿಂದ ಸಂಚಾರ ಸಮಸ್ಯೆಗಳು ಕಂಡುಬಂದಿದ್ದ ಕಾರಣ ಬೆಂಗಳೂರು ನಗರದ ಪೊಲೀಸ್ ಆಯುಕ್ತರ ಸರಹದ್ದಿಗೆ ಒಳಪಡುವ ಎಲ್ಲಾ ರಸ್ತೆಗಳಲ್ಲಿಯೂ ಸರಕು ಸಾಗಣೆ ವಾಹನಗಳು ಬೆಳಿಗ್ಗೆ 11–00 ಗಂಟೆಯಿಂದ ಸಂಜೆ 04–00 ಗಂಟೆಯವರೆಗೆ ಹಾಗೂ ರಾತ್ರಿ 10–00 ಗಂಟೆಯಿಂದ ಬೆಳಿಗ್ಗೆ 07–00ಗಂಟೆಯವರೆಗೆ ಸಂಚರಿಸುವಂತೆ ಹಾಗೂ ಬೆಳ್ಳಿಗ್ಗೆ 07–00 ಗಂಟೆಯಿಂದ 11–00 ಗಂಟೆಯವರೆಗೆ ಹಾಗೂ ಸಂಜೆ 04–00 ಗಂಟೆಯಿಂದ ರಾತ್ರಿ 10–00 ಗಂಟೆಯವರೆಗೆ ಪೊಲೀಸ್ ಆಯುಕ್ತರ ಸರಹದ್ದಿಗೆ ಒಳಪಡುವ ಎಲ್ಲಾ ರಸ್ತೆಗಳಲ್ಲಿಯೂ ಸರಕು ಸಾಗಣೆ ವಾಹನಗಳ ಪ್ರವೇಶವನ್ನು ನಿರ್ಬಂಧಿಸಲಾಗಿದೆ.
- ❖ ಪೀಕ್ ಅವರ್ಸ್‌ಗಳಲ್ಲಿ ಬೆಂಗಳೂರು ನಗರದ ಎಲ್ಲಾ ಜಂಕ್ಷನ್ ಮತ್ತು ರಸ್ತೆಗಳಲ್ಲಿ ಸಂಚಾರ ಪೊಲೀಸ್ ಅಧಿಕಾರಿ ಮತ್ತು ಸಿಬ್ಬಂದಿಯವರುಗಳು ಸಂಚಾರ ನಿರ್ವಹಣೆಯಲ್ಲಿ ತೊಡಗಿಕೊಂಡು ಸುಗಮ ವಾಹನ ಸಂಚಾರಕ್ಕೆ ಅನುವು ಮಾಡಿಕೊಡುತ್ತಾರೆ.
- ❖ ಪ್ರತಿಯೊಂದು ಸಂಚಾರ ಪೊಲೀಸ್ ಠಾಣೆಯ ವ್ಯಾಪ್ತಿಯಲ್ಲಿ ಒಂದೊಂದು ಪ್ರಮುಖ ರಸ್ತೆಗಳನ್ನು ಗುರುತಿಸಿ ಮಾದರಿ ರಸ್ತೆಯನ್ನಾಗಿ ಅಳವಡಿಸಿಕೊಳ್ಳಲಾಗಿದೆ ಹಾಗೂ ಇಂತಹ ಮಾದರಿ ರಸ್ತೆಗಳಲ್ಲಿ ಯಾವುದೇ ರೀತಿಯ ಸಂಚಾರ ಸಮಸ್ಯೆಗಳು ಸಂಭವಿಸದಂತೆ ಹಾಗೂ ರಸ್ತೆ ಸುರಕ್ಷತೆಯನ್ನು ಕಟ್ಟುನಿಟ್ಟಾಗಿ ಜಾರಿ ಮಾಡಲಾಗಿದೆ.
- ❖ ಪ್ರತಿ ಸಂಚಾರ ಪೊಲೀಸ್ ಠಾಣಾ ಮಟ್ಟದಲ್ಲಿ ಪ್ರತಿ ತಿಂಗಳ ಎರಡನೇ ಶನಿವಾರಗಳಂದು "ಸಂಚಾರ ಸಂಪರ್ಕ ದಿವಸ" ವೇದಿಕೆ ಕಾರ್ಯಕ್ರಮಗಳನ್ನು ನಡೆಸಲಾಗುತ್ತಿದ್ದು ಹಾಗೂ "ಜನಸ್ನೇಹಿ ಪೊಲೀಸಿಂಗ್" ವ್ಯವಸ್ಥೆಯನ್ನು ಜಾರಿಗೆ ತರುವ ನಿಟ್ಟಿನಲ್ಲಿ ಪ್ರತಿ ತಿಂಗಳ 4ನೇ ಶನಿವಾರದಂದು ಬೆಳಿಗ್ಗೆ 11:00 ಗಂಟೆಯಿಂದ ಮಧ್ಯಾಹ್ನ 01:00 ಗಂಟೆಯವರೆಗೆ "ಮಾಸಿಕ ಜನಸಂಪರ್ಕ ಸಭೆ" ಯನ್ನು ಹಮ್ಮಿಕೊಂಡು ಆಯಾ ಸಂಚಾರ ಠಾಣಾ ವ್ಯಾಪ್ತಿಯ ನಾಗರೀಕರು ತಮ್ಮ ಸಂಚಾರ ಸಮಸ್ಯೆಗಳನ್ನು ಠಾಣಾ ಮಟ್ಟದಲ್ಲಿ ಪರಿಹರಿಸಿಕೊಳ್ಳುವ ವೇದಿಕೆಯನ್ನು ಸೃಜಿಸಲಾಗಿದೆ.
- ❖ ಬೆಂಗಳೂರು ನಗರದಲ್ಲಿ ಸಂಚಾರ ಸಮಸ್ಯೆಗಳನ್ನು ಪರಿಹರಿಸಲು ಹಾಗೂ ಸುಗಮ ಸಂಚಾರ ಜಾರಿ ಮಾಡಲು ಮತ್ತು ರಸ್ತೆಯಲ್ಲಿ ಸುರಕ್ಷತೆಯನ್ನು ಜಾರಿ ಮಾಡಲು

| | | |
|---|---|---|
| | | ಹಲವಾರು ಕ್ರಮಗಳನ್ನು, ಆಂದೋಲನಗಳನ್ನು ಹಾಗೂ ವೃತ್ತಿಪರ ಚಾಲಕರುಗಳಿಗೆ ಹಲವಾರು ತರಬೇತಿ ಹಾಗೂ ರಸ್ತೆ ಸುರಕ್ಷತೆಯ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ನಡೆಸುತ್ತಿದ್ದು ರಸ್ತೆ ಸುರಕ್ಷತೆಯನ್ನು ಅತ್ಯುತ್ತಮ ರೀತಿಯಲ್ಲಿ ಜಾರಿ ಮಾಡಲಾಗಿದೆ.<br>❖ ನಗರದ ರಸ್ತೆಗಳಲ್ಲಿ ಸಂಚಾರ ಸಮಸ್ಯೆಗಳಿಗೆ ಪ್ರಮುಖ ಕಾರಣವಾಗಿರುವ ವಾಹನಗಳ ಅನಧಿಕೃತ, ತಪ್ಪು ನಿಲುಗಡೆ ಹಾಗೂ ಘುಟ್‌ಪಾತ್ ಮೇಲೆ ವಾಹನ ನಿಲುಗಡೆಗಳ ವಿರುದ್ಧ ಪ್ರಕಣಗಳನ್ನು ದಾಖಲಿಸಿ ಕಠಿಣ ಕ್ರಮ ಕೈಗೊಳ್ಳಲಾಗುತ್ತಿರುತ್ತದೆ.<br>❖ ಬೆಂಗಳೂರು ನಗರದಾದ್ಯಂತ ಸಮಾನ ವೇಗಮಿತಿಯನ್ನು ಜಾರಿಗೊಳಿಸಲಾಗಿದ್ದು ಅತಿ ವೇಗವಾಗಿ ಚಲಿಸುವವರ ವಿರುದ್ಧವೂ ನಗರಕ್ಕೆ ಹಂಚಿಕೆಯಾಗಿರುವ ಒಟ್ಟು 13 ಇಂಟರ್‌ಸೆಪ್ಟರ್ ವಾಹನಗಳನ್ನು ಬಳಸಿಕೊಂಡು ಸಹ ಕಟ್ಟು ನಿಟ್ಟಿನ ಕ್ರಮಗಳನ್ನು ಜರುಗಿಸಲಾಗುತ್ತಿರುತ್ತದೆ.<br>❖ ಮದ್ಯಪಾನ ಮಾಡಿ ವಾಹನ ಚಾಲನೆ ಮಾಡುವವರನ್ನು ಪತ್ತೆ ಮಾಡಲು ಅತ್ಯಾಧುನಿಕ ಅಲ್ಕೋಮೀಟರ್‌ಗಳನ್ನು ಖರೀದಿಸಲಾಗಿದ್ದು ಅವುಗಳ ಮೂಲಕ ಮದ್ಯಪಾನ ಮಾಡಿ ವಾಹನ ಚಾಲನೆ ಮಾಡುತ್ತಿರುವವರನ್ನು ಪತ್ತೆ ಮಾಡಲಾಗುತ್ತಿದೆ. ಬೆಂಗಳೂರು ನಗರ ಸಂಚಾರ ಪೊಲೀಸ್ ವಿಭಾಗವು ಮದ್ಯಪಾನ ಮಾಡಿ ವಾಹನ ಚಾಲನೆ ಮಾಡುವವರ ವಿರುದ್ಧ ಕಠಿಣ ಕ್ರಮಗಳನ್ನು ಕೈಗೊಂಡಿರುತ್ತದೆ.<br>❖ ಬೆಂಗಳೂರು ನಗರ ರಸ್ತೆಗಳಲ್ಲಿ ಪಥ ಶಿಸ್ತು ನಿಯಮಗಳ ಬಗ್ಗೆ ಅರಿವು ಮೂಡಿಸುತ್ತಾ ನಿಯಮ ಉಲ್ಲಂಘಿಸುವ ವಾಹನ ಚಾಲಕರುಗಳಿಗೆ ಕಠಿಣ ನಿಯಮಗಳ ಜಾರಿಯ ಕ್ರಮಗಳನ್ನು ಕೈಗೊಳ್ಳಲಾಗಿರುತ್ತದೆ.<br>❖ ಸಂಚಾರ ನಿರ್ವಹಣಾ ಕೇಂದ್ರವು (ಟಿಎಂಸಿ) ಆಧುನಿಕ ತಂತ್ರಜ್ಞಾನವನ್ನು ಬಳಸಿಕೊಂಡು ಬೆಂಗಳೂರು ನಗರದಾದ್ಯಂತ ಅಳವಡಿಸಲಾಗಿರುವ ಕಣ್ಗಾವಲು ಕ್ಯಾಮರಾಗಳ ಮೂಲಕ ಟಿಎಂಸಿಯಲ್ಲಿ ಅಳವಡಿಸಲಾಗಿರುವ ವಿಡಿಯೋವಾಲ್‌ನ ಮುಖಾಂತರ ಸಂಚಾರ ದಟ್ಟಣೆಯನ್ನು ನಿವಾರಿಸುವ ನಿಟ್ಟಿನಲ್ಲಿ ತೆಗೆದುಕೊಂಡ ಮೊದಲ ಹೆಜ್ಜೆ. 26 ಕಾರಿಡಾರ್‌ಗಳಲ್ಲಿ ಎರಡು ಪಾಳಿಯಲ್ಲಿ ನಿತ್ಯ ಕ್ಯಾಮರಾ ವೀಕ್ಷಿಸಿ ಜಂಕ್ಷನ್‌ಗಳಲ್ಲಿನ ಸಂಚಾರದ ದಟ್ಟಣೆಯನ್ನು ಪರಿಶೀಲಿಸಿ, ಸಿಗ್ನಲ್ ಲೈಟ್‌ನ ಸಮಯವನ್ನು ಟಿಎಂಸಿಯಿಂದಲೇ ಬದಲಾವಣೆ ಮಾಡುವ ಮೂಲಕ ಸಂಚಾರದ ಒತ್ತಡವನ್ನು ಕಡಿಮೆ ಮಾಡಿ ಸುಗಮ ಸಂಚಾರ ವ್ಯವಸ್ಥೆ ಕಲ್ಪಿಸಲು ಕ್ರಮ ಕೈಗೊಳ್ಳಲಾಗಿರುತ್ತದೆ. ಬೆಂಗಳೂರು ನಗರ ಸಂಚಾರ ವಿಭಾಗದ ಪೊಲೀಸ್ ವೆಬ್‌ಸೈಟ್ ಅನ್ನು ಪ್ರತಿನಿತ್ಯ ಸಮಗ್ರ ಮಾಹಿತಿಗಳೊಂದಿಗೆ ಇಲ್ಲಿಯೇ ಅಫ್ ಡೇಟ್ ಮಾಡಲಾಗುತ್ತಿರುತ್ತದೆ. ಹಾಗೂ ನಗರದಲ್ಲಿ ಅಳವಡಿಸಲಾಗಿರುವ ಸಿಗ್ನಲ್ ಲೈಟ್, ವಿ.ಎಂ.ಎಸ್, ಸರ್ವಿಲನ್ಸ್ ಕ್ಯಾಮರಾ ಇನ್ನಿತರೆ ತಾಂತ್ರಿಕ ಉಪಕರಣಗಳ ನಿಯಂತ್ರಣವನ್ನು ಮಾಡಬಹುದಲ್ಲದೆ, ಸಂದರ್ಭಕ್ಕೆ ತಕ್ಕಂತೆ ಮಾರ್ಪಾಡುಗಳನ್ನು ಮಾಡುವ ತಂತ್ರಜ್ಞಾನವನ್ನು ಒಳಗೊಂಡಿರುತ್ತದೆ. |

| | | |
|---|---|---|
| | | ❖ ಸಾರ್ವಜನಿಕರನ್ನು ಸಹ ಪರಿಣಾಮಕಾರಿಯಾಗಿ ಸಂಚಾರ ನಿಯಮ ಉಲ್ಲಂಘನೆ ಪ್ರಕರಣಗಳನ್ನು ದಾಖಲಿಸುವ ನಿಟ್ಟಿನಲ್ಲಿ ಬಳಸಿಕೊಳ್ಳಲಾಗುತ್ತಿದ್ದು ಪಬ್ಲಿಕ್ ಐ, ಐ ಚೇಂಜ್ ಮೈ ಸಿಟಿ ಆ್ಯಪ್‌ಗಳ ಜೊತೆಗೆ, ಫೇಸ್ ಬುಕ್, ಜಿಮೇಲ್, Whats App ನಂತಹ ಸಾಮಾಜಿಕ ಜಾಲತಾಣವನ್ನು ಸಹ ಬಳಸಿಕೊಳ್ಳಲಾಗುತ್ತಿದೆ.<br>❖ ಸಂಚಾರ ವಿಭಾಗದಲ್ಲಿ ಸಿಬ್ಬಂದಿಯ ಕೊರತೆ ಇದ್ದುದರಿಂದ ಸರ್ಕಾರದ ಮಂಜೂರಾತಿ ಪಡೆದು ಗೃಹ ರಕ್ಷಕ ದಳದ ಸಿಬ್ಬಂದಿಯನ್ನು ಸಂಚಾರ ನಿಯಂತ್ರಣ ಮತ್ತು ನಿರ್ವಹಣೆಗೆ ಬಳಸಿಕೊಳ್ಳಲಾಗುತ್ತಿದೆ.<br>❖ ಬೆಂಗಳೂರು ನಗರ ಸಂಚಾರ ವಾರ್ಡನ್ ಸಂಸ್ಥೆ ಇದ್ದು, ಸಂಚಾರ ವಾರ್ಡನ್‌ಗಳನ್ನು ಸಹ ಸಂಚಾರ ನಿಯಂತ್ರಣಕ್ಕಾಗಿ ಬಳಸಿಕೊಳ್ಳಲಾಗುತ್ತಿದೆ.<br>❖ ಸಾಮಾಜಿಕ ಜಾಲತಾಣಗಳನ್ನು ಪರಿಣಾಮಕಾರಿಯಾಗಿ ಬಳಸಿಕೊಂಡು, ದೈನಂದಿನ ದಿನಪತ್ರಿಕೆಗಳಲ್ಲಿ ಸಾರ್ವಜನಿಕರಿಗೆ ಅರಿವು ಮೂಡಿಸುವ ಭಿತ್ತಿ ಚಿತ್ರಗಳನ್ನು ಹಾಗೂ ಛಾಯಾ ಚಿತ್ರಗಳನ್ನು ಮುದ್ರಿಸಿ ಮತ್ತು ಆಂದೋಲನಗಳ ಮುಖೇನ ಪಥ ಶಿಸ್ತು ಪಾಲನೆಯ ಗುರಿ ಮತ್ತು ಉದ್ದೇಶಗಳನ್ನು ಸಾರ್ವಜನಿಕರಿಗೆ ಮನದಟ್ಟು ಮಾಡಲಾಗುತ್ತಿದೆ.<br>❖ ಬೆಂಗಳೂರು ನಗರದ ಥಣಿಸಂದ್ರದಲ್ಲಿರುವ ಸಂಚಾರ ತರಬೇತಿ ಮತ್ತು ರಸ್ತೆ ಸುರಕ್ಷತಾ ಸಂಸ್ಥೆಯಲ್ಲಿ ಸಹ ವೃತ್ತಿಪರ ಚಾಲಕರುಗಳಿಗೆ ಹಾಗೂ ಶಾಲಾ ವಾಹನಗಳ ಚಾಲಕರಿಗೆ ವಿಶೇಷವಾದ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ತನ್ಮೂಲಕ ಅರಿವು ಮೂಡಿಸುವ ಉದ್ದೇಶವನ್ನು ಸಫಲಗೊಳಿಸಲಾಗುತ್ತಿದೆ. ಪದೇ ಪದೇ ಸಂಚಾರ ನಿಯಮ ಉಲ್ಲಂಘಿಸುವ ಉಲ್ಲಂಘನೆದಾರರಿಗೂ ಸಹ ಸಂಚಾರ ತರಬೇತಿ ಮತ್ತು ರಸ್ತೆ ಸುರಕ್ಷತಾ ಸಂಸ್ಥೆಯಲ್ಲಿ ಸಂಚಾರ ನಿಯಮಗಳ ಬಗ್ಗೆ ಅರಿವು ಮೂಡಿಸುವುದರ ಜೊತೆಗೆ ರಸ್ತೆ ಸುರಕ್ಷತೆ ಬಗ್ಗೆ ತರಬೇತಿಯನ್ನು ನೀಡಲಾಗುತ್ತಿದೆ. |

ಹೆಚ್‌ಡಿ 470 ಎಸ್‌ಎಸ್‌ಟಿ 2021

(ಆರಗ ಜ್ಞಾನೇಂದ್ರ)
ಗೃಹ ಸಚಿವರು